ಕರ್ನಾಟಕ ವಿಧಾನ ಪರಿಷತ್ತು.

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ | 246 (1820) |
| ಸದಸ್ಯರ ಹೆಸರು | ಶ್ರೀ.ಯು.ಬಿ.ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ: | 22.03.2021. |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು. |

"ಪರಿಷ್ಕೃತ ಉತ್ತರ"

| ಕ್ರಸ | ಪ್ರಶ್ನೆ | ಉತ್ತರ |
|---|---|---|
| (ಅ) | ಆನ್‌ಲೈನ್ ಶಿಕ್ಷಣದಿಂದ ಶಾಲಾ ಮಕ್ಕಳಲ್ಲಿ ದೃಷ್ಟಿದೋಷ ಕಂಡು ಬರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ. |
| (ಆ) | ಬಂದಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು | ಮಕ್ಕಳ ಸಾಮಾಜಿಕ ಮತ್ತು ಭಾವನಾತ್ಮಕ ಯೋಗಕ್ಷೇಮವನ್ನು ನೋಡಿಕೊಳ್ಳುವುದು ರಾಜ್ಯದ ಪ್ರಮುಖ ಜವಾಬ್ದಾರಿಗಳಲ್ಲಿ ಒಂದಾಗಿರುತ್ತದೆ. ಮಕ್ಕಳಿಗೆ ಶಿಕ್ಷಣವನ್ನು ಒದಗಿಸುವುದು ಅದರಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಕೋವಿಡ್-19 ಸಾಂಕ್ರಾಮಿಕ ರೋಗದ ಸಮಯದಲ್ಲಿ ಶಾಲೆಗಳು ಭೌತಿಕವಾಗಿ ಮುಚ್ಚಿದಾಗ ಮಕ್ಕಳನ್ನು ಕಲಿಕೆಯಲ್ಲಿ ತೊಡಗಿಸಿಕೊಳ್ಳುವ ಕಾರ್ಯಕ್ರಮವು ಅತೀ ಅವಶ್ಯವಾಗಿದೆ. ಎಲ್.ಕೆ.ಜಿ ಯಿಂದ 5ನೇ ತರಗತಿಯವರೆಗೆ ಮತ್ತು 6 ರಿಂದ 10ನೇ ತರಗತಿಯವರೆಗೆ ಆನ್‌ಲೈನ್ ಶಿಕ್ಷಣವನ್ನು ವಯೋಮಾನಕ್ಕೆ ಅನುಗುಣವಾಗಿ ವೈಜ್ಞಾನಿಕವಾಗಿ ಅಳವಡಿಸಲು ಮಾರ್ಗಸೂಚಿಗಳನ್ನು ಸಿದ್ಧಪಡಿಸಲು ತಜ್ಞರ ಸಮಿತಿಯನ್ನು ರಚಿಸಲಾಗಿತ್ತು. ಸದರಿ ಸಮಿತಿಯು ಶಿಕ್ಷಣ ತಜ್ಞರು ಹಾಗೂ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ (NIMHANS ) ತಜ್ಞರೊಂದಿಗೆ ಸಮಾಲೋಚಿಸಿ, ಸ್ವೀಕರಿಸಿದ ಸಲಹೆಗಳ ಆಧಾರದ ಮೇಲೆ ಪೂರ್ವ ಪ್ರಾಥಮಿಕ ತರಗತಿಯಿಂದ 10ನೇ ತರಗತಿಯವರೆಗೆ ಆನ್‌ಲೈನ್ ಶಿಕ್ಷಣ ನೀಡುವ ಸಂಬಂಧ ವಿದ್ಯಾರ್ಥಿಗಳಿಗೆ ಹೆಚ್ಚು ತೊಂದರೆ ಆಗದಂತೆ ಈ ಕೆಳಕಂಡಂತೆ ವಿಧಾನಗಳನ್ನು ಅನುಸರಿಸಲು ಆದೇಶಿಸಲಾಗಿರುತ್ತದೆ. |
| | | ಪೂರ್ವ ಪ್ರಾಥಮಿಕ: 30 ನಿಮಿಷಗಳಿಗೆ ಮೀರದಂತೆ ಪಾಲಕರೊಂದಿಗೆ ಮಾತ್ರ ವಾರಕ್ಕೆ ಒಂದು ದಿನ ಆನ್‌ಲೈನ್ ಸಂವಹನ ಮತ್ತು ಮಾರ್ಗದರ್ಶನ ನೀಡಬಹುದು |

| ಕ್ರಸ | ಪ್ರಶ್ನೆ | ಉತ್ತರ | |
|---|---|---|---|
| | | 1 ರಿಂದ 5 | 30–45 ನಿಮಿಷಗಳ 2 ಅವಧಿಗಳಿಗೆ ಮೀರದಂತೆ ದಿನ ಬಿಟ್ಟು ದಿನ (ವಾರದಲ್ಲಿ ಗರಿಷ್ಠ 3 ದಿನ) Synchronous ವಿಧಾನದಲ್ಲಿ ಆನ್‌ಲೈನ್ ಶಿಕ್ಷಣ ನೀಡಬಹುದು. |
| | | 6 ರಿಂದ 8 | 30–45 ನಿಮಿಷಗಳ 2 ಅವಧಿಗಳಿಗೆ ಮೀರದಂತೆ ವಾರದಲ್ಲಿ 5 ದಿನ Synchronous ವಿಧಾನದಲ್ಲಿ ಆನ್‌ಲೈನ್ ಶಿಕ್ಷಣ ನೀಡಬಹುದು. |
| | | 9 ರಿಂದ 10 | 30–45 ನಿಮಿಷಗಳ 4 ಅವಧಿಗಳಿಗೆ ಮೀರದಂತೆ ವಾರದಲ್ಲಿ 5 ದಿನ Synchronous ವಿಧಾನದಲ್ಲಿ ಆನ್‌ಲೈನ್ ಶಿಕ್ಷಣ ನೀಡಬಹುದು. |

[ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು.